ಶಾಲೆಗಳ ಪುನರಾರಂಭ- ಪುನಶ್ಚೇತನಕ್ಕೆ ಒಂದು ಅವಕಾಶ

ಟುಲ್‌ಟುಲ್ ಬಿಸ್ವಾಸ್

"ಮೇಡಂ, ಶಾಲೆ ಯಾವಾಗ ಶುರುವಾಗುತ್ತದೆ?" (ಮೇಡಂಜಿ, ಸ್ಕೂಲ್ ಕಬ್ ಖುಲೇಗಾ?)- ನಾವು ಕೆಲಸ ಮಾಡುವ ಮಧ್ಯಪ್ರದೇಶದ ಆರು ಜಿಲ್ಲೆಗಳಲ್ಲಿ ಸರ್ಕಾರಿ ಶಾಲೆಗಳ ಶಿಕ್ಷಕರಿಗೆ ಪದೇಪದೇ ಮಕ್ಕಳಿಂದ ಎದುರಾಗುವ ಸಾಮಾನ್ಯ ಪ್ರಶ್ನೆ ಇದು. ವರ್ಕ್‌ಶೀಟ್‌ಗಳು ಮತ್ತು ಡಿಜಿಟಲ್‌ಪಾಠಗಳ ಪ್ರಗತಿ ಪರಿಶೀಲನೆಗಾಗಿ ಮಕ್ಕಳನ್ನು ಶಾಲೆಗೆ ಬರಮಾಡಿಕೊಂಡಾಗಲೆಲ್ಲ ಮಕ್ಕಳಿಂದ ಈ ಪ್ರಶ್ನೆಯನ್ನು ಮೇಲಿಂದ ಮೇಲೆ ಕೇಳುತ್ತಲೇ ಇರಬೇಕಾಗಿದೆ. ಸಣ್ಣ ವಯಸ್ಸಿನವರಾದ 3, 4, 5 ಮತ್ತು 6ನೇ ತರಗತಿಯ ಮಕ್ಕಳು ಶಾಲೆಗೆ ಬರುವುದಕ್ಕೆ ಹಾತೊರೆಯುತ್ತಿದ್ದಾರೆ ಎಂದು ಕಾಣುತ್ತದೆ. ಅವರಿಗೆ ಶಾಲೆಯಲ್ಲಿ ಮಾತ್ರ ಸಿಗಬಹುದಾದ ಸಮಾನ ವಯಸ್ಸಿನವರೊಂದಿಗೆ ಬೆರೆಯುವ ಮತ್ತು ಸಮಯ ಕಳೆಯುವ ಮೂಲಕ ಶೈಕ್ಷಣಿಕ ವಾತಾವರಣ ನೀಡುವ ಸಾಮಾಜೀಕರಣ ಅತ್ಯಂತ ಅವಶ್ಯವಾಗಿ ಬೇಕಾಗಿದೆ.

ದೇಶದ ಬಹುತೇಕ ರಾಜ್ಯಗಳಲ್ಲಿ ಕೋವಿಡ್-19 ಪ್ರಕರಣಗಳು ಇಳಿಮುಖವಾಗುತ್ತಿರುವ ಹಿನ್ನೆಲೆಯಲ್ಲಿ ಬಹುತೇಕ ರಾಜ್ಯಗಳು ಸುಮಾರು ಒಂದುವರೆ ವರ್ಷದ ಬಳಿಕ ಶಾಲೆಗಳು ಮತ್ತು ಶೈಕ್ಷಣಿಕ ಸಂಸ್ಥೆಗಳನ್ನು ತೆರೆದು ಭೌತಿಕ ತರಗತಿಗಳನ್ನು ನಡೆಸುವುದಾಗಿ ಘೋಷಿಸುತ್ತಿವೆ. ಮಧ್ಯಪ್ರದೇಶ, ಹರಿಯಾಣ, ಛತ್ತೀಸ್‌ಗಡ ಮತ್ತು ದೆಹಲಿಯಂತಹ ಕೆಲವು ರಾಜ್ಯಗಳು ಈಗಾಗಲೇ 9 ಮತ್ತು ಮೇಲಿನ ತರಗತಿಗಳಿಗೆ ಭೌತಿಕ ತರಗತಿಗಳನ್ನು ಪ್ರಾಯೋಗಿಕವಾಗಿ ನಡೆಸುತ್ತಿವೆ. ಹರಿಯಾಣ ಮತ್ತು ಛತ್ತೀಸ್‌ಗಡ ರಾಜ್ಯಗಳು ಮುಂದಿನ ಕೆಲವೇ ವಾರಗಳಲ್ಲಿ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳನ್ನು ಆರಂಭಿಸುವುದಾಗಿ ಪ್ರಕಟಿಸಿವೆ. ಪ್ರಾಥಮಿಕ ಶಾಲಾ ಮಕ್ಕಳಿಗೆ ಮೂಲಭೂತವಾಗಿ ಅಕ್ಷರಾಭ್ಯಾಸ ಮತ್ತು ಸಂಖ್ಯಾ ಅಭ್ಯಾಸಕ್ಕೆ ಶಿಕ್ಷಕರೊಂದಿಗೆ ಮುಖಾಮುಖಿ ಕಲಿಕೆಯ ಅವಶ್ಯಕತೆ ಇದೆ ಎಂಬ ಬಗ್ಗೆ ತಜ್ಞರು ಅಭಿಪ್ರಾಯಪಟ್ಟಿದ್ದರೂ, ಅವುಗಳ ಬದಲಾಗಿ ಸರ್ಕಾರಗಳು ಒಂಬತ್ತು ಮತ್ತು ಮೇಲಿನ ತರಗತಿಗಳನ್ನು ಮಾತ್ರ ಪ್ರಾರಂಭಿಸುತ್ತಿರುವುದು ಪರಿಸ್ಥಿತಿಯ ವ್ಯಂಗ್ಯವಾಗಿದೆ.

ಮಧ್ಯಪ್ರದೇಶದ ಹೊಸಂಗಾಬಾದ್ ಜಿಲ್ಲೆಯ ಓರ್ವ ಬ್ಲಾಕ್ ಶೈಕ್ಷಣಿಕ ಸಂಯೋಜಕರು (Block Academic Coordinator -BAC), ಶಾಲೆ ಎಂದರೆ ಏನು ಎಂದು ಕಾಣದೆಯೇ ಒಂದೂವರೆ ವರ್ಷ ಕಳೆದಿರುವ 6-7 ವರ್ಷ ಪ್ರಾಯದ ಮಕ್ಕಳು, ಮುಂದಿನ ದಿನಗಳಲ್ಲಿ ಶಾಲೆಗೆ ಹೋದಾಗ ಶಾಲೆಯ ಪ್ರಕ್ರಿಯೆಯನ್ನು ಹೇಗೆ ಎದುರಿಸಬಹುದು ಎಂದು ಇತ್ತೀಚೆಗೆ ಆತಂಕ ವ್ಯಕ್ತಪಡಿಸಿದ್ದರು. ಈ ಪ್ರಾಯದ ಮಕ್ಕಳಿಗೆ ಮನೆಯಿಂದ ಶಾಲೆಗೆ ಹೋಗುವುದು ಎಂದರೆ ಏನು ಎಂಬುದೂ ತಿಳಿದಿಲ್ಲ. ಅವರು ಶಾಲೆಗೆ ಬಂದಾಗ ನಾವು ಏನು ಹೇಳಿಕೊಡುತ್ತೇವೆ- ಶಾಲೆಯ ಔಪಚಾರಿಕ ಪ್ರಕ್ರಿಯೆ ಅಥವಾ 1, 2, ಅಥವಾ 3ನೇ ತರಗತಿಯ ಪಾಠಗಳನ್ನು ಹೇಳಿಕೊಡಬಹುದೇ? ಎಂಬುದಾಗಿ ಪ್ರಾಥಮಿಕ ಶಾಲಾ ಶಿಕ್ಷಕರು ಕೂಡ ಇದನ್ನೇ ಪ್ರಶ್ನಿಸಿದ್ದರು.

ಈ ಎಲ್ಲಾ ಅಂಶಗಳನ್ನು ಗಮನದಲ್ಲಿಟ್ಟುಕೊಂಡು, ಶಾಲೆಗಳನ್ನು ಪುನರಾರಂಭಿಸಲು ಎಲ್ಲಾ ತಯಾರಿಗಳು ನಡೆಯುತ್ತಿರುವ ಈ ಹೊತ್ತಿನಲ್ಲಿ, ಶಾಲೆಗಳು ಅಧಿಕೃತವಾಗಿ ಪುನರಾರಂಭವಾದಾಗ ಮತ್ತು ನಂತರದ ದಿನಗಳಲ್ಲಿ

ಗಮನಿಸಬೇಕಾದ ಮೂಲಭೂತ ಅಂಶಗಳ ಬಗ್ಗೆ ನಾನು ಇಲ್ಲಿ ಪ್ರಸ್ತಾಪಿಸಿದ್ದೇನೆ.

//ಬಾಕ್ಸ್//

ಕಡ್ಡಾಯ ಶಿಕ್ಷಣದ ಹಕ್ಕು (ಆರ್‌ಟಿಇ) ಕಾನೂನಿನ ಅನ್ವಯ ಸುರಕ್ಷಿತವಾಗಿರಬೇಕಾದ, ಒಂದರಿಂದ ಎಂಟನೇ ತರಗತಿಯೊಳಗಿನ ಮಕ್ಕಳನ್ನು ಪರಿಣಾಮಕಾರಿಯಲ್ಲದ ಆನ್‌ಲೈನ್‌ಮಾದರಿಯ ಶಿಕ್ಷಣದತ್ತ ಬಲವಂತವಾಗಿ ಎಳೆತಂದಿದ್ದೇವೆ ಎಂಬುದು ದೇಶ ಗಮನಿಸಬೇಕಾದ ಮತ್ತು ಆತಂಕಪಡಬೇಕಾದ ಸಂಗತಿ. ಹಾಗಾಗಿ, ಕೆಳದರ್ಜೆಯ ತರಗತಿಗಳನ್ನು ತಕ್ಷಣದಿಂದಲೇ ಪುನರಾರಂಭಿಸುವ ಬಗ್ಗೆ ನಾವೆಲ್ಲರೂ ಒಟ್ಟಾಗಿ ದನಿ ಎತ್ತಬೇಕಾಗಿದೆ. ಅಲ್ಲದೆ, ಶಾಲೆಗಳು ಪುನರಾರಂಭವಾದಾಗ, ಅವು ಹೇಗೆ ಕಾರ್ಯ ನಿರ್ವಹಿಸಬೇಕು ಎಂಬ ಬಗ್ಗೆ ಕ್ರಿಯಾಶೀಲವಾಗಿ ಮತ್ತು ರಚನಾತ್ಮಕವಾಗಿ ಯೋಜಿಸಬೇಕಾಗಿದೆ.

೦೦

ಪರಿಣಾಮಕಾರಿ ಕ್ಷೇತ್ರದಲ್ಲಿ ಸದಾ ನುಣುಚಿಕೊಳ್ಳುವಿಕೆ

ಕಲಿಕೆಯು ಮಾನಸಿಕ-ಸಾಮಾಜಿಕ ಮತ್ತು ಭಾವನಾತ್ಮಕ ಪ್ರಕ್ರಿಯೆ ಹಾಗೂ ನಮಗೆ ಸೂಕ್ತವೆನಿಸಿದ ಮತ್ತು ಸುರಕ್ಷಿತವೆನಿಸಿದ ವ್ಯಕ್ತಿಗಳೊಂದಿಗೆ ನಂಟು ಬೆಸೆಯುವ ಪ್ರಕ್ರಿಯೆ ಎಂಬುದು ನಮಗೆಲ್ಲರಿಗೂ ಪ್ರತ್ಯಕ್ಷ ತಿಳಿದಿದೆಯಾದರೂ, ಆಗಾಗ ಮರೆತುಬಿಡುತ್ತೇವೆ ಎಂದು ಅನಿಸುತ್ತದೆ. ಸರ್ಕಾರಿ ಮತ್ತು ಖಾಸಗಿ ಶಾಲಾ ಶಿಕ್ಷಕರಿಗಾಗಿ ಮತ್ತು ತಳವರ್ಗದ ಶೈಕ್ಷಣಿಕ ಕಾರ್ಯಕರ್ತರಿಗಾಗಿ ಹಮ್ಮಿಕೊಳ್ಳಲಾದ ಕಾರ್ಯಾಗಾರಗಳಲ್ಲಿ ಮಕ್ಕಳು ಈ ಹಿಂದಿನ ಶಾಲಾ ಜೀವನದಲ್ಲಿ ಅನುಭವಿಸಿದ ಭಾವನೆಗಳನ್ನು ಚಿತ್ರಿಸಲು ಪ್ರಯತ್ನಪಡುತ್ತಲೇ ಬಂದಿದ್ದೇನೆ. ಈಗ ನನ್ನ ಬಳಿ, ದೇಶದ ವಿವಿಧ ಭಾಗಗಳ 500ಕ್ಕೂ ಹೆಚ್ಚು ಭಾಗೀದಾರರ ದತ್ತಾಂಶಗಳು ಮತ್ತು ಪ್ರಾಥಮಿಕ ಶಾಲಾ ಜೀವನದಲ್ಲಿ ಮಕ್ಕಳು ಅನುಭವಿಸುವ ಪ್ರಧಾನವಾದ ಭಾವನೆಯೆಂದರೆ ಅದು ಭಯ ಎಂಬ ವಾಸ್ತವ ಸಂಗತಿಯು ಕ್ಯಾನ್ವಾಸ್ ಮೇಲೆ ದೊಡ್ಡದಾಗಿ ಚಿತ್ರಿತವಾಗಿದೆ. ಇದನ್ನು ಬದಲಾಯಿಸಿ, ಮಕ್ಕಳಿಗೆ ಧನಾತ್ಮಕವಾದ, ತೊಡಗಿಸಿಕೊಳ್ಳುವ, ಭಾವನಾತ್ಮಕವಾಗಿ ಸದೃಢವಾಗಿಸುವ ಮತ್ತು ಶೈಕ್ಷಣಿಕವಾಗಿ ಸವಾಲಿನ ವಾತಾವರಣವನ್ನು ವಿದ್ಯಾರ್ಥಿಗಳಿಗೆ ನಾವು ಸೃಷ್ಟಿಸಬೇಕಾಗಿದೆ.

ಕೋವಿಡ್-19ನಿಂದಾಗಿ ಎಷ್ಟೋ ಮಂದಿ ಆಪ್ತರನ್ನು ಕಳೆದುಕೊಂಡಿದ್ದು, ಜೀವನದಲ್ಲಿ ನಾವೆಲ್ಲರೂ ಪರಸ್ಪರ ಧನಾತ್ಮಕ ಸಂಬಂಧಗಳನ್ನು ಕಟ್ಟಿಕೊಳ್ಳಬೇಕಾಗಿದೆ ಎಂಬುದನ್ನು ಪರಿಸ್ಥಿತಿ ಅರ್ಥ ಮಾಡಿಸಿದೆ. ಇನ್ನು, ಶಿಕ್ಷಕರಿಗೆ ವಿದ್ಯಾರ್ಥಿಗಳ ಜೊತೆಗೆ ಧನಾತ್ಮಕ ನಂಟು ಬೆಳೆಸಿಕೊಳ್ಳುವುದಕ್ಕಿಂತ ಉತ್ತಮ ಮಾರ್ಗ ಬೇರೆ ಯಾವುದು ಇದೆ?

ಈಗಾಗಲೇ, ಸರ್ಕಾರಿ ಶಾಲೆಗಳಲ್ಲಿನ ಮಕ್ಕಳ ಗಣತಿಯು, ಶಾಲೆಗಳಲ್ಲಿ ದಲಿತ ಮತ್ತು ಪರಿಶಿಷ್ಟ ಪಂಗಡದ (ಎಸ್‌ಟಿ)

ಹಾಗೂ ಬಾಲಕಿಯರ ಸಂಖ್ಯೆ ಅಧಿಕವಿದೆ ಎಂಬುದನ್ನು ಸ್ಪಷ್ಟವಾಗಿ ತೋರಿಸಿಕೊಟ್ಟಿದೆ. (i) ಅಂದರೆ ಅತ್ಯಂತ ಆರ್ಥಿಕ ಸಂಕಷ್ಟದಲ್ಲಿರುವ ಕುಟುಂಬಗಳ ಮಕ್ಕಳೂ ಸರ್ಕಾರ ಶಾಲೆಗಳಿಗೆ ಹಾಜರಾಗುತ್ತಾರೆ. ಈ ಮಕ್ಕಳ ಪೋಷಕರು ದಿನದ ಕೂಲಿಗಾಗಿ ಹೋರಾಟ ಮಾಡುವವರಾದ ಕಾರಣ ಈ ಮಕ್ಕಳು ದೈಹಿಕವಾಗಿ ಮತ್ತು ಭಾವನಾತ್ಮಕವಾಗಿ ಹಸಿದಿರುತ್ತಾರೆ ಎಂಬುದನ್ನೂ ಇದು ಸೂಚಿಸುತ್ತದೆ. ಈ ಮಕ್ಕಳು ತರಗತಿಯಲ್ಲಿ ಒಂದು ವಿಷಯದ ಬಗ್ಗೆ ಗಮನ ಕೇಂದ್ರೀಕರಿಸಬೇಕಾದರೆ, ಅವರಿಗೆ ಕಲಿಕಾ ಕೊಠಡಿಯ ಅಧಿಕೃತ ವ್ಯಕ್ತಿಯಾದ ಶಿಕ್ಷಕರಿಂದ ದೊಡ್ಡ ಪ್ರಮಾಣದ ಸ್ವೀಕಾರ ಮತ್ತು ದೃಢೀಕರಣದ ಅವಶ್ಯಕತೆ ಇದೆ. ಶಿಕ್ಷಕರಾಗಿ ನಾವು ಮಾಡಬಹುದಾದ ಅತ್ಯುತ್ತಮ ಕೆಲಸವೆಂದರೆ, ಮಕ್ಕಳಿಗೆ ತರಗತಿಯಲ್ಲಿ ಆತ್ಮೀಯ ಮತ್ತು ಸ್ವೀಕಾರ ಮನೋಭಾವದ ಆತ್ಮೀಯ ವಾತಾವರಣವನ್ನು ಕಟ್ಟಿಕೊಡಬೇಕು ಎಂಬುದನ್ನು ಅರ್ಥ ಮಾಡಿಕೊಳ್ಳುವುದು. ಮೊದಲಿಗೆ, ನಮ್ಮಲ್ಲಿಯೇ ಇರಬಹುದಾದ ಪೂರ್ವಗ್ರಹಗಳನ್ನು ಗುರುತಿಸಿ, ವಿಮರ್ಶಿಸಿಕೊಂಡು, ಅದಕ್ಕೆ ಪರಿಹಾರವನ್ನೂ ಕಂಡುಕೊಳ್ಳಬೇಕು. ಎರಡನೇ ರಚನಾತ್ಮಕವಾದ ಹೆಜ್ಜೆ ಎಂದರೆ, ಈ ಪೂರ್ವಗ್ರಹಗಳನ್ನು ಪ್ರಶ್ನಿಸಿ ಅವುಗಳ ಮೂಲವನ್ನು ಪತ್ತೆ ಹಚ್ಚುವುದು. ಈ ಮೂಲಕ, ವಿದ್ಯಾರ್ಥಿಗಳ ಸಾಮಾಜಿಕ-ಆರ್ಥಿಕ ಹಿನ್ನೆಲೆಯನ್ನು ಅರ್ಥ ಮಾಡಿಕೊಂಡು, ಅವರನ್ನು ಅವರು ಇರುವ ಹಾಗೇ ಒಪ್ಪಿಕೊಂಡು, ಪ್ರೀತಿ ಮತ್ತು ಕಾಳಜಿಯಿಂದ ಅವರೊಂದಿಗೆ ಆತ್ಮೀಯತೆ ಬೆಳೆಸಿಕೊಳ್ಳಲು ಅನುವು ಆಗುತ್ತದೆ.

ಸಣ್ಣ ವಯಸ್ಸಿನ ಮಕ್ಕಳ ತರಗತಿಗಳಲ್ಲಿ ಕಲಿಕೆ ಮತ್ತು ಮಾನಸಿಕ ಆರೋಗ್ಯ ಒಂದಕ್ಕೊಂದು ಹೇಗೆ ಸಂಬಂಧಿಸಿದೆ ಎಂಬುದು ಈ ಚರ್ಚೆಗೆ ಇರುವ ಇನ್ನೊಂದು ಪ್ರಮುಖ ಆಯಾಮವಾಗಿದೆ.

*//ಚಿತ್ರ ಇದೆ///*

ಮೇಲೆ ನೀಡಲಾಗಿರುವ ಚಿತ್ರದಲ್ಲಿ ತೋರಿಸಿರುವಂತೆ, ಭಾವನೆಗಳು, ಸ್ಫೂರ್ತಿ ಮತ್ತು ಅರಿವು ಪರಸ್ಪರ ಒಂದಕ್ಕೊಂದು ನಂಟು ಹೊಂದಿರುವ ಮೂರು ಅಂಶಗಳು ಮಕ್ಕಳನ್ನು ಕಲಿಕೆಯತ್ತ ಆಕರ್ಷಿಸಿ, ಜೊತೆಯಾಗಿ ಕಲಿಯುವಂತೆ ಪ್ರಭಾವಿಸುತ್ತವೆ. ಹಾಗಾಗಿ, ಕಲಿಕೆಯು ಅರ್ಥಪೂರ್ಣವಾಗಬೇಕಾದರೆ, ಶಿಕ್ಷಕರಾಗಿ ನಾವು ಕಲಿಕಾರ್ಥಿಯ ಭಾವನಾತ್ಮಕ ಸ್ಥಿತಿಯೊಂದಿಗೆ ನಮ್ಮನ್ನು ತೊಡಗಿಸಿಕೊಳ್ಳುತ್ತೇವೆ, ಅವರು ತರಗತಿಯಲ್ಲಿ ತುಂಬುವ ಭಾವನಾತ್ಮಕ ಉತ್ಸಾಹವನ್ನು ಗೌರವಿಸುತ್ತೇವೆ ಹಾಗೂ ಅದರ ನೆರವಿನಿಂದ ತರಗತಿಯಲ್ಲಿ ಅರಿವನ್ನು ಪ್ರೇರೇಪಿಸುವಂತಹ ವಾತಾವರಣವನ್ನು ಸೃಷ್ಟಿಸುತ್ತೇವೆ.

ಮೊದಲಿಗೆ, ಶಿಕ್ಷಕರಾಗಿ ನಾವು ನಮ್ಮ ವಿದ್ಯಾರ್ಥಿಗಳೊಂದಿಗೆ ಭಾವನಾತ್ಮಕ ನಂಟು ಬೆಳೆಸುವ ಅಗತ್ಯವಿದೆಎಂಬುದನ್ನು ನಾವು ಅರ್ಥ ಮಾಡಿಕೊಳ್ಳಬೇಕು. ಕೆಲವು ಮಕ್ಕಳನ್ನು ಇಷ್ಟಪಡಬಹುದು, ಕೆಲವರನ್ನು ಇಷ್ಟಪಡದೇ ಇರಬಹುದು, ಇನ್ನು ಕೆಲವರನ್ನು ಹತ್ತಿರ ಸೇರಿಸದೆಯೂ ಇರಬಹುದು ಎಂಬುದನ್ನು ನಾವು ಒಪ್ಪಿಕೊಳ್ಳಬೇಕು. ಮನುಷ್ಯರಾಗಿ, ನಮ್ಮೊಳಗೇ ಇರಬಹುದಾದ ಇಂತಹ ಭಾವನೆಗಳನ್ನು ಹುಡುಕಿ, ಅದಕ್ಕೆ ಮೂಲ ಕಾರಣವನ್ನು ಕಂಡುಕೊಳ್ಳಬಹುದೇ? ಈ ಬಗ್ಗೆ ಹೆಚ್ಚು

ಜಾಗೃತರಾಗಿ, ನಮ್ಮ ಭಾವನೆಗಳನ್ನು ಒಪ್ಪಿಕೊಂಡು, ಅದನ್ನು ಪರಿಹರಿಸುವ ಪ್ರಕ್ರಿಯೆಯಲ್ಲಿ ತೊಡಗಿಸಿಕೊಳ್ಳಬಹುದೇ?

ಮಕ್ಕಳ ತಿಳಿವಳಿಕೆ ಮೇಲೆಯೇ ರೂಪಿಸಿ

ಕಳೆದ ವರ್ಷದಿಂದೀಚೆಗೆ, 'ಕಲಿಕೆಯ ಅಂತರ' ಮತ್ತು 'ಕಲಿಕೆಯ ನಷ್ಟ' ಎಂಬ ಪದಗಳನ್ನು ನಾವು ಪದೇಪದೇ ಕೇಳಿದ್ದೇವೆ. ಕಲಿಕಾ ಅಂತರ ಮತ್ತು ಕಲಿಕಾ ನಷ್ಟದ ಬಗ್ಗೆ ನಾವು ತಿಳಿದುಕೊಂಡರೆ, ನೀತಿಯ ಹಂತದ ಬದಲಾವಣೆ ಮತ್ತು ಪಠ್ಯಕ್ರಮವನ್ನು ರೂಪಿಸುವ ಹಂತದಲ್ಲಿ ನೆರವಾಗಬಹುದು. ಹಾಗಾದಾಗ, ಸುಮಾರು ಒಂದೂವರೆಯಿಂದ ಎರಡು ವರ್ಷಗಳ ನಂತರ ಶಾಲೆಗೆ ಬರಲಾರಂಭಿಸಿರುವ ಮಕ್ಕಳ ಒದ್ದಾಟವನ್ನು ಅರ್ಥ ಮಾಡಿಕೊಳ್ಳುವುದು ಸುಲಭವಾಗುತ್ತದೆ. ಹಾಗಿದ್ದರೂ, ಮಕ್ಕಳು ತಮ್ಮ ಬೆಳವಣಿಗೆಯ ವರ್ಷಗಳಲ್ಲಿ, ಲಾಕ್‌ಡೌನ್ ಮತ್ತು ಶಾಲೆ ಮುಚ್ಚಿದ್ದ ಈ ಅವಧಿಯಲ್ಲಿ ತಮ್ಮದೇ ಆದ ಅನುಭವಗಳನ್ನು ಗಳಿಸಿರುವ ಸಾಧ್ಯತೆಯಿಲ್ಲವೇ? ಬಹುಶಃ, ಅವರ ಒಂದಷ್ಟು ಪುಟಿದೇಳುವ ಹುಮ್ಮಸ್ಸು, ಪರಿಶ್ರಮ, ಕೆಲವು ಹೊಸ ಕಲೆ ಮತ್ತು ಕೌಶಲ ಅಥವಾ ಪಿಡುಗು ಅಥವಾ ಸಾಂಕ್ರಾಮಿಕದ ಹೊಸ ಭಾಷೆಯನ್ನು ಕಲಿತಿರಬಹುದಲ್ಲವೇ?

ಹೊಸಂಗಾಬಾದ್‌ಗೆ ಇತ್ತೀಚೆಗೆ ಭೇಟಿ ನೀಡಿದಾಗ, 8 ಅಥವಾ 9 ವರ್ಷದ ಒಂದು ಮಗು, 'ಮೇಡಂಜಿ, ಲಾಕ್‌ಡೌನ್ ಮತ್ತು ಲಾಕ್‌ಅಪ್ ನಡುವೆ ವ್ಯತ್ಯಾಸ ಏನು?'ಎಂದು ಕೇಳಿತು. ಅವಳಿಗೆ ಇಂಗ್ಲಿಷ್‌ನ ಪರಿಕಲ್ಪನಾತ್ಮಕ ಪದಗಳಾದ 'ಒಳಗೆ-ಹೊರಗೆ', 'ಸಣ್ಣ-ದೊಡ್ಡ', 'ಮೇಲೆ-ಕೆಳಗೆ', 'ತೆಳು-ದಪ್ಪ' ಮುಂತಾದವುಗಳ ಬಗ್ಗೆ ತಿಳಿದುಕೊಂಡಿದ್ದಳು ಎಂಬುದು ನನಗೆ ಗೊತ್ತಿತ್ತು. ಆದರೆ, ಇಂಗ್ಲಿಷ್ ಭಾಷಾ ಕಲಿಕೆಯಲ್ಲಿನ ಪರಿಕಲ್ಪನೆಗಳನ್ನು ಆ ಬಾಲಕಿ ತನ್ನ ಸುತ್ತಮುತ್ತಲಿನ ಆಗುಹೋಗುಗಳಿಗೆ ಅನ್ವಯಿಸಿದ ರೀತಿ ನನ್ನನ್ನು ಸ್ತಬ್ಧಳನ್ನಾಗಿಸಿತು.

ಲಾಕ್‌ಡೌನ್ ಮತ್ತು ಶಾಲೆ ಮುಚ್ಚಿದ್ದ ಅವಧಿಯಲ್ಲಿ ಮಕ್ಕಳು ಕಂಡುಕೊಂಡ ಅನುಭವಗಳನ್ನು ತರಗತಿಯಲ್ಲಿ ಕೇಳಿಸಿಕೊಂಡು ಅರ್ಥ ಮಾಡಿಕೊಳ್ಳುವುದು ಸೂಕ್ತ. ಅವರ ಕುಟುಂಬದಲ್ಲಿ ಏನೇನಾಯಿತು, ಅವರ ಪೋಷಕರ ಉದ್ಯೋಗ, ಆಹಾರಕ್ಕಾಗಿ ಅವರು ಏನು ಮಾಡಿದರು ಮತ್ತು ದಿನಸಿ ಪೂರೈಕೆ ಹೇಗಿತ್ತು, ಅವರು ತಮ್ಮ ನೆರೆಹೊರೆಯವರನ್ನು ಮತ್ತು ಸ್ನೇಹಿತರನ್ನು ಭೇಟಿಯಾಗಿದ್ದರೇ, ಆಗ ಏನು ಮಾತಾಡಿಕೊಂಡರು, ಅವರ ಕುಟುಂಬದಲ್ಲಿ ಯಾರಾದರೂ ಕೋವಿಡ್ ಸೋಂಕಿಗೆ ತುತ್ತಾಗಿದ್ದರೇ, ಆಗ ಅವರಿಗೆ ಯಾವ ರೀತಿಯ ವೈದ್ಯಕೀಯ ನೆರವು ಸಿಕ್ಕಿತು, ಕಷ್ಟಕಾಲದಲ್ಲಿ ಅವರಿಗೆ ಯಾರು ನೆರವಾದರು ಮುಂತಾದ ಸಂಗತಿಗಳನ್ನು ಅವರೊಂದಿಗೆ ಕೇಳಿ ತಿಳಿದುಕೊಳ್ಳಬಹುದು. ಈ ಪಟ್ಟಿ ಮುಗಿಯುವಂತಹುದಲ್ಲ. ತಮ್ಮ ವಿದ್ಯಾರ್ಥಿಗಳು ಬದುಕುವ ರೀತಿಗೆ ತಕ್ಕುದಾಗಿ ಶಿಕ್ಷಕರು ಈ ಪಟ್ಟಿಯನ್ನು ಸಿದ್ಧಪಡಿಸಬಹುದು. ವಿದ್ಯಾರ್ಥಿಗಳ ಜೀವನದಲ್ಲಿ ಲಾಕ್‌ಡೌನ್ ಅವಧಿಯ ತಿಂಗಳುಗಳು ಹೇಗಿದ್ದವು ಮತ್ತು ಎದುರಾದ ಸವಾಲುಗಳೇನು ಎಂಬ ವಿಷಯವಾಗಿ ತರಗತಿಯಲ್ಲಿ ಶಿಕ್ಷಕರು ಮತ್ತು ವಿದ್ಯಾರ್ಥಿಗಳು ನಡುವೆ ಚರ್ಚಿಸುವುದು ಉತ್ತಮ ಹಾದಿಯಾದೀತು. ಶಿಕ್ಷಕರು ಸಂವೇದನಾಶೀಲರಾಗಿ ಮಾತನಾಡುತ್ತಾ, ಮಕ್ಕಳ ಮಾತನ್ನು ಆಲಿಸುತ್ತಾ, ಕಳೆದ ವರ್ಷಗಳ ಬಗ್ಗೆ ಅವರಲ್ಲಿರುವ ಮಾಹಿತಿ ಮತ್ತು ತಿಳಿವಳಿಕೆ ಏನು ಎಂಬುದನ್ನು ಈ ಮೂಲಕ ಅರ್ಥ ಮಾಡಿಕೊಳ್ಳಬಹುದು.ಈ

ಚರ್ಚೆಯು ಮೊದಲನೆಯದಾಗಿ, ಶಿಕ್ಷಕರು ಮತ್ತು ವಿದ್ಯಾರ್ಥಿಗಳ ನಡುವೆ ಧನಾತ್ಮಕ ನಂಟನ್ನು ಮೂಡಿಸಲು ನೆರವಾಗಬಹುದು. ಎರಡನೆಯದಾಗಿ, ಮಕ್ಕಳು ತರಗತಿಗೆ ಬರುವಾಗ ಯಾವ ರೀತಿಯ ಅನುಭವಗಳೊಂದಿಗೆ ಬಂದಿದ್ದಾರೆ ಎಂಬುದರ ಆಧಾರದಲ್ಲಿ ಕಲಿಕೆಯ ಸದೃಢವಾದ ತಳಪಾಯ ಹಾಕಿದಂತೆಯೂ ಆಗುತ್ತದೆ. ಹೀಗೆ, ಸಹಾನುಭೂತಿ ಮತ್ತು ರಚನಾತ್ಮಕವಾದ ತಳಪಾಯದ ಮೇಲೆ ಕಲಿಕೆಯು ಆರಂಭವಾಗುವುದು ಸೂಕ್ತ.

ತರಗತಿಯ ವಿನ್ಯಾಸ ಮತ್ತು ಆಸನ ವ್ಯವಸ್ಥೆ

ದೈಹಿಕ ಅಂತರ ಕಾಪಾಡಿಕೊಳ್ಳುವುದು ನಾವಿರುವ ಹೊಸ ಪರಿಸ್ಥಿತಿಯ ಭಾಗವಾಗಿದೆ. ತರಗತಿಯಲ್ಲಿಯೂ ಸಹ ಕೆಲ ಸಮಯದವರೆಗೂ ದೈಹಿಕ ಅಂತರ ಕಾಪಾಡಿಕೊಂಡು ಮಕ್ಕಳಿಗೆ ಆಸನ ವ್ಯವಸ್ಥೆ ಮಾಡುವುದು ಅವಶ್ಯ. ಇದು, ತರಗತಿಯ ಇಕ್ಕಟ್ಟಿನ ವಾತಾವರಣವನ್ನು ತಿಳಿಗೊಳಿಸುವುದಲ್ಲದೆ, ಮಕ್ಕಳು ಒಬ್ಬರ ಹಿಂದೆ ಒಬ್ಬರು ಕುಳಿತುಕೊಳ್ಳುವುದು ಕಲಿಕೆಯ ದೃಷ್ಟಿಯಿಂದ ಉತ್ತಮ ಕ್ರಮ. ನಮಗೆ ನಾವು ಕೇಳಿಕೊಳ್ಳಬೇಕಾದ ಪ್ರಶ್ನೆ ಏನೆಂದರೆ: ಯಾವ ರೀತಿಯ ಕುಳಿತುಕೊಳ್ಳುವ ವ್ಯವಸ್ಥೆ ಮಕ್ಕಳನ್ನು ಹೆಚ್ಚು ಒಳಗೊಳ್ಳುವಂತೆ ಮಾಡುತ್ತದೆ ಮತ್ತು ಕಲಿಕೆಯಲ್ಲಿ ತೊಡಗಿಸಿಕೊಳ್ಳುವಂತೆ ಮಾಡುತ್ತದೆ?

ನಾವು ಈಗ ಮಕ್ಕಳನ್ನು ತಂಡ ತಂಡವಾಗಿ ಶಾಲೆಗೆ ಬರಮಾಡಿಕೊಳ್ಳಬೇಕಾಗಿರುವುದು ಕೋವಿಡ್‌ರ ಮತ್ತೊಂದು ವಾಸ್ತವವಾಗಿದೆ. ಕುಗ್ರಾಮದ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ, ವಿದ್ಯಾರ್ಥಿಗಳ ದಾಖಲಾತಿ ಪ್ರಮಾಣ 20ರಿಂದ 80 ಇರಬಹುದು. ಅಂತಹ ಶಾಲೆಗಳಲ್ಲಿ ಎರಡೋ ಮೂರೋ ಕೊಠಡಿಗಳು ಮತ್ತು ವರಾಂಡದಂತಹ ತೆರೆದ ಜಾಗ ಇರಬಹುದು. ಹೀಗಿರುವಾಗ, ಮಕ್ಕಳನ್ನು ದೊಡ್ಡದಾದ ವೃತ್ತಾಕಾರದಲ್ಲಿ ಕುಳಿತುಕೊಳ್ಳುವಂತೆ ಮಾಡಿದರೆ, ಒಬ್ಬರ ಮುಖವನ್ನೊಬ್ಬರು ಹಾಗು ಶಿಕ್ಷಕರು/ ಸುಗಮಕಾರರನ್ನೂ ನೋಡಲೂ ಸಾಧ್ಯವಾಗುತ್ತದೆ. ಹೆಚ್ಚಿನ ಪ್ರಮಾಣದ ದಾಖಲಾತಿ ಇರುವ ಶಾಲೆಗಳಲ್ಲಿ, ಅವಶ್ಯ ಕೊಠಡಿಗಳು ಮತ್ತು ಅಗತ್ಯವಿರುವಷ್ಟು ಶಿಕ್ಷಕರು ಇಲ್ಲದೇ ಇದ್ದರೆ, ಮಕ್ಕಳ ಸಣ್ಣಸಣ್ಣ ಗುಂಪಿಗೆ ಕುಳಿತುಕೊಳ್ಳಲು ಮತ್ತು ಪಾಠ ಮಾಡಲು ಸೌಕರ್ಯ ಇರುವುದಿಲ್ಲ. ಹಾಗಾಗಿ ಅಂತಹ ಶಾಲೆಗಳಲ್ಲಿ ಮಕ್ಕಳನ್ನು ಅರ್ಧ ದಿನಕ್ಕೋ, ವಾರದ ನಿಯಮಿತ ದಿನಗಳಲ್ಲಿ ಇಡೀ ದಿನದ ತರಗತಿಗೋ ಕರೆಸಿಕೊಳ್ಳುವುದೇ ಸೂಕ್ತ.

ಎರಡೂ ಪ್ರಸಂಗಗಳಲ್ಲಿ, ಶಿಕ್ಷಕ ಕೇಂದ್ರಿತವಾಗಿದ್ದ ಹಳೆಯ ಮಾದರಿಯ ಕುಳಿತುಕೊಳ್ಳುವ ವಿನ್ಯಾಸವನ್ನು ಮುರಿದು ಹೊಸ ನಮೂನೆಯ ಅಂದರೆ, ವೃತ್ತಾಕಾರವಾದ, ಎಲ್ಲಾ ವಿದ್ಯಾರ್ಥಿಗಳು ಪರಸ್ಪರ ಮತ್ತು ಶಿಕ್ಷಕರನ್ನು ನೋಡಲು ಅವಕಾಶವಿರುವಂತಹ ವಿನ್ಯಾಸವನ್ನು ಸ್ವೀಕರಿಸುವುದಕ್ಕೆ ಇದು ಸಕಾಲ. ಮಕ್ಕಳು ಒಬ್ಬರಿಂದ ಒಬ್ಬರು ಒಂದು ಕೈ ಅಳತೆಯಷ್ಟು ದೂರ ಕುಳಿತುಕೊಂಡರೂ ತರಗತಿಯಲ್ಲಿ ಎಲ್ಲರಿಗೂ ಮುಖಾಮುಖಿಯಾಗಲು ಅವಕಾಶವಿರುತ್ತದೆ. ಈ ವ್ಯವಸ್ಥೆಯು ಮಕ್ಕಳನ್ನು ಶಿಕ್ಷಕ ಕೇಂದ್ರಿತ ಕಲಿಕಾ ಶೈಲಿಯಿಂದ ತಾವೇ ಪರಸ್ಪರ ಚರ್ಚಿಸಿಕೊಂಡು ಕಲಿಯುವ

ವಾತಾವಣಕ್ಕೆ ಕೊಂಡೊಯ್ಯುತ್ತದೆ.ಈ ವ್ಯವಸ್ಥೆ ಮಾಡಿದ ನಂತರ, ಮಕ್ಕಳು ಪರಸ್ಪರ ಚರ್ಚಿಸಿಕೊಂಡು, ಒಬ್ಬರಿಗೊಬ್ಬರು ನೆರವಾಗುತ್ತಾ ಕಲಿಯಲು ಶುರು ಮಾಡುತ್ತಾರೆ. ಮುಂದೆ, ವಿದ್ಯಾರ್ಥಿಗಳನ್ನು ಸಣ್ಣಸಣ್ಣ ಗುಂಪುಗಳಾಗಿ ವಿಭಾಗಿಸಿ, ಶಿಕ್ಷಕರ ಮಾರ್ಗದರ್ಶನದಲ್ಲಿ ಕೆಲವು ಚಟುವಟಿಕೆಗಳನ್ನು ಮಾಡಲು ಅನುವು ಮಾಡಿಕೊಡಬಹುದು. ಕೊಠಡಿಗಳು ಸಣ್ಣದಾಗಿದ್ದು, ಎಲ್ಲಾ ವಿದಾರ್ಥಿಗಳು ದೊಡ್ಡ ಅಂತರ್ಗತ ವೃತ್ತದಲ್ಲಿ ಕುಳಿತುಕೊಳ್ಳಲು ಸ್ಥಳಾವಕಾಶದ ಕೊರತೆ ಇದ್ದರೆ, ಅಗತ್ಯ ದೈಹಿಕ ಅಂತರ ಕಾಪಾಡಿಕೊಂಡು ಸಣ್ಣಸಣ್ಣ ಗುಂಪುಗಳನ್ನು ರಚಿಸಿ, ಸಹಪಾಠಿಗಳ ನಡುವಿನ ಮುಕ್ತ ಚರ್ಚೆಗೆ ಅವಕಾಶ ಸಿಗುವಂತೆ ಮಾಡಬಹುದು.

// ಕಲಿಕೆಯಲ್ಲಿ ಪೌಷ್ಟಿಕಾಂಶ ಮತ್ತು ಆರೋಗ್ಯದ ಮಹತ್ವ

ಸ್ವತಃ ನಮ್ಮ ಮತ್ತು ನಮ್ಮ ಸುತ್ತಮುತ್ತಲಿನವರ ಆರೋಗ್ಯದ ಬಗ್ಗೆಯೂ ಕಾಳಜಿ ವಹಿಸಬೇಕು ಎಂಬ ಪಾಠವನ್ನು ಕೋವಿಡ್‌ನಮಗೆ ಕಲಿಸಿಕೊಟ್ಟಿದೆ. ಈ ಅನುಭವದಿಂದ ಶಾಲಾ ಶಿಕ್ಷಣವು ಕಲಿಯಬೇಕಿದ್ದು, ಶಾಲೆಯೊಳಗೆ ಸಮರ್ಪಕ ಪೌಷ್ಟಿಕಾಂಶ ಮತ್ತು ಆರೋಗ್ಯ ಬೆಂಬಲ ವ್ಯವಸ್ಥೆಯನ್ನು ಕಟ್ಟಬೇಕು. ಒಬ್ಬರ ಶರೀರ ಮತ್ತು ಅದು ಹೇಗೆ ಕಾರ್ಯ ನಿರ್ವಹಿಸುತ್ತದೆ ಎಂಬ ಬಗ್ಗೆ ಅರಿವು, ಆರೋಗ್ಯದ ಬಗೆಗಿನ ಮೂಲ ತಿಳಿವಳಿಕೆಗಳು ಮೊದಲಾದ ವಿಚಾರಗಳು ಪ್ರತಿಯೊಂದು ಪ್ರಾಥಮಿಕ ಶಾಲಾ ಪಠ್ಯಕ್ರಮದಲ್ಲಿ ಪ್ರಮುಖ ಸ್ಥಾನ ಪಡೆಯಬೇಕು. ಈ ನಿಟ್ಟಿನಲ್ಲಿ ಶಾಲಾ ಆವರಣದಲ್ಲಿಯೇ ಕನಿಷ್ಠ ಮತ್ತು ಪ್ರಾಥಮಿಕ ಆರೋಗ್ಯ ರಕ್ಷಣಾ ಸೌಕರ್ಯಗಳು ಇರುವಂತೆ ನೋಡಿಕೊಳ್ಳುವುದು ಶಾಲೆಗಳು ತೆಗೆದುಕೊಳ್ಳಬಹುದಾದ ಇನ್ನೊಂದು ಹೆಜ್ಜೆಯಾಗಿದೆ. ಮಧ್ಯಾಹ್ನದ ಬಿಸಿಯೂಟ (ಎಂಡಿಎಂ) ಎಷ್ಟು ಮಹತ್ವ ಹೊಂದಿದೆ ಹಾಗು ಅದು ಮಗುವನ್ನು ತರಗತಿಯ ಅರಿವಿನ ಚೌಕಟ್ಟಿನಲ್ಲಿ ಹೇಗೆ ಹಿಡಿದಿಡಬಲ್ಲದು ಎಂಬುದರ ಬಗ್ಗೆ ನಮಗೆ ಈಗಾಗಲೇ ತಿಳಿದಿದೆ. ಮಧ್ಯಾಹ್ನದ ಬಿಸಿಯೂಟ ಯೋಜನೆಯು ಈಗ 6ರಿಂದ 14 ವರ್ಷದೊಳಗಿನ ಮಕ್ಕಳಿಗೆ ( ಹಾಗು ಅಂಗನವಾಡಿಯ 3ರಿಂದ 6 ವರ್ಷದೊಳಗಿನ ಮಕ್ಕಳಿಗೆ) ಮಾತ್ರ ಲಭ್ಯವಿದೆ. ಭಾರತದಲ್ಲಿ, ಸರ್ಕಾರಿ ಶಾಲೆಗಳಿಗೆ ಬರುವ ಮಕ್ಕಳು ಯಾವುದೇ ಸಮಾಜದ ಅವಕಾಶವಂಚಿತ ಮತ್ತು ಅತಿ ಬಡ ಕುಟುಂಬದವರಾಗಿದ್ದು, ಅವರಿಗೆ ಮನೆಯಲ್ಲಿ ಆಹಾರ ಸಿಗುವ ಯಾವ ಖಾತ್ರಿಯೂ ಇಲ್ಲ. ಈ ಪೌಷ್ಟಿಕಾಂಶದ ಕೊರತೆಯನ್ನು ನೀಗಿಸಲು ಮಧ್ಯಪ್ರದೇಶದಲ್ಲಿ ಎಂಟನೇ ತರಗತಿಯವರೆಗಿನ ಮಕ್ಕಳಿಗೆ ಮಧ್ಯಾಹ್ನದ ಬಿಸಿಯೂಟ ಯೋಜನೆ ಹಮ್ಮಿಕೊಂಡಿದ್ದರೆ, ಮಹಾರಾಷ್ಟ್ರದಂತಹ ಕೆಲವು ರಾಜ್ಯಗಳಲ್ಲಿ ಏಳನೇ ತರಗತಿವರೆಗಿನ ಮಕ್ಕಳಿಗೆ ಈ ಯೋಜನೆ ಲಭ್ಯವಿದೆ. ಆದರೂ, ಹಿರಿಯ ತರಗತಿಗಳ ವಿದ್ಯಾರ್ಥಿಗಳಿಗೂ ಮಧ್ಯಾಹ್ನದ ಬಿಸಿಯೂಟ ಯೋಜನೆಯನ್ನು ಮುಂದುವರಿಸಬೇಕಾದ ಅಗತ್ಯವನ್ನು ಛತ್ತೀಸ್‌ಗಢದ ಶಿಕ್ಷಕರು ನಡೆಸಿದ ಅಧ್ಯಯನವೊಂದು ಸ್ಪಷ್ಟವಾಗಿ ಸೂಚಿಸಿದೆ. ವಿದ್ಯಾರ್ಥಿ ಪ್ರೌಢಶಾಲೆಗೆ ಬಡ್ತಿ ಹೊಂದಿದ ತಕ್ಷಣ (ಅದು ಎಂಟನೇ ತರಗತಿ ಇರಬಹುದು, ಒಂಬತ್ತನೇ ತರಗತಿ ಇರಬಹುದು) ಈ ಮಧ್ಯಾಹ್ನದ ಬಿಸಿಯೂಟ ಯೋಜನೆಯೂ ಅವರಿಗೆ ತಪ್ಪಿಹೋಗುತ್ತದೆ ಹಾಗು ಅವರ ಮನೆಯಲ್ಲಿನ ಊಟದ ಕೊರತೆ ಮುಂದುವರಿಯುತ್ತದೆ. ಹೀಗೆ, ಪೌಷ್ಟಿಕ ಆಹಾರ ಸೇವನೆ ನಿಂತುಹೋದಾಗ ಅವರಲ್ಲಿ ಪೌಷ್ಟಕಾಂಶದ ಕೊರತೆ ಎದುರಾಗುತ್ತದೆ. ಪೌಷ್ಟಿಕತೆಯ ಆಹಾರದ

ಕೊರತೆಯಿಂದಾಗಿ, ಮಕ್ಕಳ ಶರೀರದ ಪೌಷ್ಟಿಕತೆ ಕುಂಟಿತಗೊಂಡು, ಹಲವರನ್ನು ಸ್ವಲ್ಪ ಅಥವಾ ಹೆಚ್ಚಿನ ಅಪೌಷ್ಟಿಕತೆಗೆ ದೂಡುತ್ತದೆ. ಕೋವಿಡ್ 19 ಪರಿಸ್ಥಿತಿ ಮತ್ತು ಜನಜೀವನದ ನಷ್ಟವು ಈ ಪರಿಸ್ಥಿತಿಯನ್ನು ಇನ್ನಷ್ಟು ಹದಗೆಡಿಸಿದೆ. ಮಕ್ಕಳು ಎಷ್ಟೋ ತಿಂಗಳವರೆಗೆ ಹಸಿದುಕೊಂಡೋ, ಮಾಮೂಲಿಗಿಂತ ಕಡಿಮೆ ಆಹಾರ ಸೇವಿಸಿಕೊಂಡೋ ಇರಬೇಕಾದ ಪರಿಸ್ಥಿತಿಯನ್ನು ಕೋವಿಡ್ ತಂದೊಡ್ಡಿದೆ. ಹಾಗಾಗಿ, ಶಾಲೆಗೆ ಹೋಗುವ ಎಲ್ಲಾ ಮಕ್ಕಳಿಗೆ ಒಂದು ಹೊತ್ತಿನ ಬಿಸಿಯೂಟ ಒದಗಿಸಬೇಕಾದ ತುರ್ತು ಅವಶ್ಯಕತೆ ಈಗ ಒದಗಿಬಂದಿದೆ. // ಶಿಕ್ಷಕರಲ್ಲಿನ ಒತ್ತಡವನ್ನು ಗುರುತಿಸುವುದು

ಸಾಂಕ್ರಾಮಿಕದ ಅವಧಿಯಲ್ಲಿ ಸ್ವತಃ ಶಿಕ್ಷಕರೂ ಸಹ ಅತಿಯಾದ ಒತ್ತಡದಲ್ಲಿದ್ದರು. ಮಧ್ಯಪ್ರದೇಶದಂತಹ ರಾಜ್ಯಗಳಲ್ಲಿ, ಕ್ವಾರಂಟೈನ್ ಮತ್ತು ಐಸೊಲೇಷನ್ ಕೇಂದ್ರಗಳನ್ನು ನಿಭಾಯಿಸುವ ಜವಾಬ್ದಾರಿಯನ್ನು ಶಿಕ್ಷಕರಿಗೆ ವಹಿಸಲಾಗಿತ್ತು. ಅಲ್ಲದೆ, ಲಸಿಕಾ ಅಭಿಯಾನ ಮತ್ತು ಸಮೀಕ್ಷೆಗಳು, ಮೊಹಲ್ಲಾಗಳಲ್ಲಿ ತರಗತಿ ನಡೆಸುವುದು, ಪಠ್ಯಪುಸ್ತಕಗಳು, ದಿನಸಿ ಮತ್ತು ವರ್ಕ್‌ಶೀಟ್‌ಗಳನ್ನು ವಿತರಿಸಲು ಮನೆಯಿಂದ ಮನೆಗೆ ಭೇಟಿ ನೀಡುವುದು, ಧಾನ್ಯಗಳ ಖರೀದಿ ಮೇಲೆ ನಿಗಾ ವಹಿಸಲು ಮಂಡಿಗಳಿಗೆ ಭೇಟಿ ನೀಡುವುದು ಮುಂತಾದ ಕೆಲಸಗಳಲ್ಲಿ ಶಿಕ್ಷಕರು ತೊಡಗಿಸಿಕೊಂಡಿದ್ದರು. ಇಂತಹ ಕೆಲಸಗಳಲ್ಲಿ ತರಬೇತಿ ಇಲ್ಲದೆ, ಪಿಪಿಇ ಕಿಟ್ ಕೂಡಾ ಇಲ್ಲದೆ, ಹೆಚ್ಚುವರಿ ವಿಮೆಯ ಸೌಲಭ್ಯದ ಬೆಂಬಲವೂ ಇಲ್ಲದೆ, ಎಷ್ಟೋ ಮಂದಿ ತಮ್ಮ ಜೀವವನ್ನೇ ಅಪಾಯಕ್ಕೆ ಒಡ್ಡಿಕೊಂಡಿದ್ದರೆ ಇನ್ನೂ ಕೆಲವರು ಕೋವಿಡ್ ಅಥವಾ ಇತರ ಒತ್ತಡ ಸಂಬಂಧಿ ಕಾಯಿಲೆಯಿಂದಾಗಿ ತಮ್ಮ ಜೀವ ಕಳೆದುಕೊಂಡದ್ದೂ ಇದೆ.

ಡಿಜಿಟಲ್ ತಂತ್ರಜ್ಞಾನಗಳನ್ನು ಕಲಿಯುವುದು ಮತ್ತು ನಿಭಾಯಿಸುವುದು ತಮ್ಮ ಸಾಮರ್ಥ್ಯ ವರ್ಧನೆಯ ಉದ್ದೇಶಕ್ಕಷ್ಟೇ ಅಲ್ಲದೆ, ವರ್ಚುವಲ್ ಮಾದರಿಯಲ್ಲಿ ಬೋಧನೆ ಮಾಡಬೇಕಾದ ಜವಾಬ್ದಾರಿಯನ್ನು ನಿಭಾಯಿಸುವ ನಿಟ್ಟಿನಲ್ಲಿಯೂ ಅತ್ಯವಶ್ಯವಾಗಿತ್ತು. ಇದು ಶಿಕ್ಷಕರಲ್ಲಿನ ಒತ್ತಡವನ್ನು ಇನ್ನಷ್ಟು ಹೆಚ್ಚಿಸಲು ಕಾರಣವಾಯಿತು. ಅಂತಹ ಸನ್ನಿವೇಶದಲ್ಲಿ, ಶಿಕ್ಷಕರನ್ನು ದೈಹಿಕವಾಗಿ ಮತ್ತು ಮಾನಸಿಕವಾಗಿ ಸಜ್ಜುಗೊಳಿಸಿ, ಕಠಿಣ ಪರಿಸ್ಥಿತಿಗಳಲ್ಲಿ ಕೆಲಸ ಮಾಡುವಂತೆ ಪ್ರಯತ್ನಗಳನ್ನು ಮಾಡಿರುವುದು ಪ್ರಮುಖ ಅಂಶವಾಗಿದೆ. ಶಿಕ್ಷಕರು ತಮ್ಮ ಭಾವನೆಗಳನ್ನು ಗುರುತಿಸಿ, ಸ್ವೀಕರಿಸಿ, ನಿಭಾಯಿಸುತ್ತಲೇ ಒತ್ತಡ ನಿವಾರಿಸುವ ನಿಟ್ಟಿನಲ್ಲಿ ಕೆಲಸ ಮಾಡುವ ಅವಶ್ಯಕತೆ ಇದೆ. ಶಿಕ್ಷಕರು ಸಂಪೂರ್ಣ ಗಮನ ನೀಡುವ ಬಗ್ಗೆ ಹೊಸಂಗಾಬಾದ್ ಜಿಲ್ಲೆಯ ಎಲ್ಲಾ ಬ್ಲಾಕ್‌ಗಳ ಶಿಕ್ಷಕರಿಗೆ ನಾವು ಹಮ್ಮಿಕೊಂಡ ಕಾರ್ಯಾಗಾರ ತುಂಬಾ ಪ್ರಯೋಜನಕಾರಿಯಾಗಿತ್ತು. ಕಾರ್ಯಾಗಾರದಲ್ಲಿ ಅವರು ತಮ್ಮ ಪಾಡಿಗೆ ಇರುವಂತೆ ಅಂದರೆ, ತಮ್ಮ ಸುತ್ತಮುತ್ತಲಿನ ಸದ್ದು, ದೃಶ್ಯಗಳು ಮತ್ತು ಸ್ಪರ್ಶದ ಅನುಭವಗಳ ಬಗ್ಗೆ ಲಕ್ಷ್ಯ ಕೊಟ್ಟು ಕಾಲ ಕಳೆಯುವಂತೆ ಮಾಡಲಾಯಿತು. ನಾವು (ಎ) ಶಿಕ್ಷಕರಿಗಾಗಿ ಬ್ಲಾಕ್ ಮಟ್ಟದಲ್ಲಿ ಅಂತಹ ಹೆಚ್ಚು ಕಾರ್ಯಾಗಾರಗಳನ್ನು ಹಮ್ಮಿಕೊಳ್ಳುವ ಬಗ್ಗೆ ಯೋಜನೆ ಹಾಕಿದ್ದೇವೆ ಮತ್ತು (ಬಿ) ಅವರಿಗೆ ಅಂತಹ ಚಟುವಟಿಕೆಗಳನ್ನು ಹೆಚ್ಚಾಗಿ ನೀಡುವ ಮೂಲಕ ಅವುಗಳನ್ನು ನಂತರದ ದಿನಗಳಲ್ಲಿ ತಮ್ಮ ತರಗತಿಗಳಲ್ಲಿ ಅಳವಡಿಸಿಕೊಳ್ಳಬೇಕು. ಆ ಮೂಲಕ ವಿದ್ಯಾರ್ಥಿಗಳ ಒತ್ತಡ ನಿವಾರಿಸಲು ಅವರು ಗಮನ ಕೇಂದ್ರೀಕರಿಸಬೇಕು ಎಂಬುದು ನಮ್ಮ ಯೋಜನೆ. ತಂತ್ರಜ್ಞಾನದ ಬಳಕೆ

ಶಾಲೆ ಮತ್ತು ನಮ್ಮ ದೈನಂದಿನ ಬದುಕಿನ ಇತರ ಆಯಾಮಗಳಿಗೆ ಸಂಬಂಧಿಸಿದ ತಂತ್ರಜ್ಞಾನದ ಬಗ್ಗೆ ಇಲ್ಲಿ

ಮಾತನಾಡೋಣ. ಶಾಲಾ ಸನ್ನಿವೇಶದಲ್ಲಿ, ಅದರಲ್ಲಿಯೂ ಸರ್ಕಾರಿ ಶಾಲಾ ಮಕ್ಕಳ ಸನ್ನಿವೇಶದಲ್ಲಿ ಇದನ್ನು ಪರಿಭಾವಿಸುವಾಗ, ಬಹುತೇಕ ಮಕ್ಕಳಿಗೆ ಡಿಜಿಟಲ್ ಕಲಿಕೆಯ ವಿಷಯಗಳನ್ನು ಪಡೆಯುವುದು ಸಾಧ್ಯವಾಗುವುದಿಲ್ಲ ಎಂಬ ವಾಸ್ತವವನ್ನು ನಾವು ಗಮನಿಸಬೇಕಾಗುತ್ತದೆ. ಇನ್ನೂ ಕೆಲವರು ಅದರಲ್ಲಿ ಅರ್ಥಪೂರ್ಣವಾಗಿ ತೊಡಗಿಸಿಕೊಳ್ಳಬಹುದು. ಆದರೆ ಹೊಸ ಸಹಜತೆಯನ್ನು ನಾವು ಅಲಕ್ಷಿಸುವಂತಿಲ್ಲ. ಆದರೂ, ಮಕ್ಕಳು ಸರಳ ಪ್ರಕ್ರಿಯೆಗಾಗಿ ಡಿಜಿಟಲೀಕರಣವನ್ನು ಕಲಿತರೆ, ಅವರ ಜೀವನದ ಮೇಲೆ ಪರಿಣಾಮ ಬೀರುವಂಥ ಕೆಲವೊಂದು ಅನುಕೂಲಗಳೂ ಇವೆ. ಉದಾಹರಣೆಗೆ, ನವೋದಯ ವಿದ್ಯಾಲಯಕ್ಕೆ ಅಥವಾ ವಿದ್ಯಾರ್ಥಿವೇತನಕ್ಕೆ ಅರ್ಜಿ ಸಲ್ಲಿಸುವುದು ಮಗುವಿಗೆ ಸಾಧ್ಯವಾಗುತ್ತದೆ. ಮಧ್ಯಪ್ರದೇಶ ಮತ್ತು ಮಹಾರಾಷ್ಟ್ರದಲ್ಲಿ ಏಕಲವ್ಯ ಫೌಂಡೇಷನ್ ಒಂದು ಪ್ರಯತ್ನವನ್ನು ಮಾಡಿತು. ಅದೇನೆಂದರೆ, ಸಮುದಾಯಕ್ಕಾಗಿ ಕಡಿಮೆ ವೆಚ್ಚದ Raspberry-Pi ಸೆಟ್‌ಗಳನ್ನು ಹಾಗು ಐದರಿಂದ ಎಂಟನೇ ತರಗತಿವರೆಗಿನ ಪ್ರತಿಯೊಬ್ಬ ವಿದ್ಯಾರ್ಥಿಗೆ ವೈಯಕ್ತಿಕ ಲಾಗ್-ಇನ್‌ಖಾತೆಗಳನ್ನು ಒದಗಿಸಿಕೊಟ್ಟಿತು. ಈ ಸಮುದಾಯ ಕೇಂದ್ರಗಳಿಗೆ ವಿದ್ಯಾರ್ಥಿಗಳು ತಂಡಗಳಲ್ಲಿ ಬಂದು, www.teysu.in ಜಾಲತಾಣಕ್ಕೆ ಲಾಗ್-ಇನ್ ಆಗಿ, ಪೂರ್ವ ವಿನ್ಯಾಸಗೊಂಡ ತಾಣದಲ್ಲಿ ಕೆಲಸ ಮಾಡಬಹುದು, ಹಿಂದಿ, ಇಂಗ್ಲಿಷ್ ಮತ್ತು ಗಣಿತದ ಬಗ್ಗೆ ಪರಸ್ಪರ ಚರ್ಚೆ ಮಾಡಿಕೊಂಡು ಕಲಿಯಬಹುದು. ಇದಕ್ಕೆ ವಿದ್ಯಾರ್ಥಿಗಳು, ಶಿಕ್ಷಕರು ಮತ್ತು ಶಿಕ್ಷಕರಿಂದ ಅತ್ಯುತ್ತಮ ಪ್ರತಿಕ್ರಿಯೆ ವ್ಯಕ್ತವಾಯಿತು. ಸ್ಥಳೀಯ ಯುವಕರು ಮತ್ತು ಶಿಕ್ಷಕರು ಇದರಲ್ಲಿ ನಿರೂಪಕರಾಗಿ ಕೆಲಸ ನಿರ್ವಹಿಸಿ, ವಿದ್ಯಾರ್ಥಿಗಳ ಕುತೂಹಲಗಳಿಗೆ ಮತ್ತು ಕಲಿಕಾ ಪ್ರಯತ್ನಗಳಿಗೆ ಸೂಕ್ತ ಪರಿಹಾರ ಒದಗಿಸುತ್ತಿದ್ದರು.

//ಬಾಕ್ಸ್//

ಸಂಕ್ಷಿಪ್ತವಾಗಿ ಹೇಳುವುದಾದರೆ, ತಂತ್ರಜ್ಞಾನದಿಂದ ವಿಮುಖರಾಗಿ ಇರುವುದು ಹಳೆಯ ಸಂಗತಿ. ಪ್ರಸ್ತುತ, ಮನುಷ್ಯರಾಗಿ ಶಿಕ್ಷಕರ ಮಹತ್ವವನ್ನು ಗೌರವಿಸುತ್ತಲೇ, ವಿದ್ಯಾರ್ಥಿಗಳನ್ನು ತಂತ್ರಜ್ಞಾನದಲ್ಲಿ ಪರಿಣತರಾಗಿಸುವ ನಿಟ್ಟಿನಲ್ಲಿ ಕ್ರಿಯಾಶೀಲವಾಗಿ ಚಿಂತನೆ ನಡೆಸಬೇಕಾಗಿದೆ. ಶಾಲೆಗಳು ಪುನರಾರಂಭವಾಗಲು ತಯಾರಿ ನಡೆಯುತ್ತಿರುವಂತೆಯೇ, ಡಿಜಿಟಲ್ ಸಾಧನಗಳನ್ನು ದುರಸ್ತಿ ಮತ್ತು ನಿರ್ವಹಣೆ ಮಾಡಿಸಿ, ಬಳಕೆಗೆ ಯೋಗ್ಯವಾಗಿರುವಂತೆ ಮಾಡಿ, ಶಿಕ್ಷಕರು ಬಳಸಿ, ವಿದ್ಯಾರ್ಥಿಗಳಿಗೆ ಅನುವು ಮಾಡಿಕೊಡಬೇಕಾಗಿದೆ.

೦೦೦

ಮೌಲ್ಯಮಾಪನದ ಮರು ಚಿಂತನೆ/ಕಲ್ಪನೆ

ಆನ್‌ಲೈನ್ ಶಿಕ್ಷಣವು ಮೌಲ್ಯಮಾಪನದ ಪದ್ಧತಿಯನ್ನು ತಪ್ಪು ದಾರಿಗೆ ಎಳೆದಿದೆ. ನೇರ ಉತ್ತರವನ್ನು ಬಯಸುವ ಸರಳ ಪ್ರಶ್ನೆಗಳು ಆನ್‌ಲೈನ್ ಮೌಲ್ಯಮಾಪನಕ್ಕೆ ಸ್ವೀಕೃತವಾಗದು. ಹೀಗಾಗಿ, ಮೌಲ್ಯಮಾಪನಕ್ಕಾಗಿ ಕಲಿಕೆ ಎಂದರೆ ಏನು

ಎಂದೂ, ಮಕ್ಕಳ ನಿಜವಾದ ಸಾಮರ್ಥ್ಯವನ್ನು ಅಳೆಯುವ ವ್ಯವಸ್ಥೆಯನ್ನು ಅಭಿವೃದ್ಧಿಗೊಳಿಸಿ, ಹೊಸ ಸನ್ನಿವೇಶಕ್ಕೆ ಅದನ್ನು ಅನ್ವಯಗೊಳಿಸುವ ಬಗ್ಗೆ ನಾವು ಶಿಕ್ಷಕರೊಂದಿಗೆ ಚರ್ಚಿಸಬೇಕಾಗಿದೆ.

ಅಂತಹ ಒಂದು ಮಾರ್ಗವೇನೆಂದರೆ, ತೆರೆದ ಪುಸ್ತಕದ ಪರೀಕ್ಷೆ ನಡೆಸುವುದು ಮತ್ತು ಮಕ್ಕಳಿಗೆ ಚಿಂತನೆಗೆ, ವಿವಿಧ ಬಗೆಯ ಮಾಹಿತಿ ಕಲೆ ಹಾಕಲು ಹಾಗು ಹೊಸ ಕಲಿಕಾ ಪದ್ಧತಿಗೆ ಅದನ್ನು ಅನ್ವಯ ಮಾಡಲು ಸಾಧ್ಯವಾಗುವಂತಹ ಪ್ರಶ್ನೆಗಳನ್ನು ಸಿದ್ಧಪಡಿಸುವುದು.ದೇಶದೆಲ್ಲೆಡೆ, ಒಂದೂವರೆ ವರ್ಷಗಳ ನಂತರ ಶಾಲೆಗಳನ್ನು ಪುನರಾರಂಭಿಸಲು ತಯಾರಿ ನಡೆಸುತ್ತಿರುವಂತೆಯೇ, ಈಗಾಗಲೇ ಕರಡು ನಿಯಮಗಳ ಮೂಲಕ ಪ್ರಸ್ತಾವನೆ ಸಲ್ಲಿಸಲಾಗಿರುವ ಮತ್ತು ಸಣ್ಣ ಪ್ರಮಾಣದಲ್ಲಿ ಪ್ರಾಯೋಗಿಕವಾಗಿ ಅಳವಡಿಸಲಾಗಿರುವ ಕೆಲವು ಬದಲಾವಣೆಗಳನ್ನು ಅನುಷ್ಠಾನಕ್ಕೆ ತರುವ ಬಗ್ಗೆ ಯೋಚಿಸಲು ಇದು ಅವಕಾಶ ಮಾಡಿಕೊಟ್ಟಿದೆ. ಹಾಗಾಗಿ, ಸವಾಲನ್ನು ಅವಕಾಶವಾಗಿ ಮಾರ್ಪಡಿಸಲು ಇದು ಸಕಾಲ. ಅವುಗಳನ್ನು ನಾವು ಹೇಗೆ ಸಾಧ್ಯವಾಗಿಸುತ್ತೇವೆ ಮತ್ತು ಒಂದು ಲೋಟವನ್ನು ನಾವು ಅರ್ಧ ತುಂಬಿದಂತೆ ಪರಿಗಣಿಸುತ್ತೇವೋ, ಪೂರ್ತಿ ತುಂಬಿದಂತೆಯೋ ಎಂಬುದರ ಮೇಲೆ ಶಿಕ್ಷಣದ ಪುನರುಜ್ಜೀವನವು ಅವಲಂಬಿಸಿದೆ.

ಅಂತಿಮ ಟಿಪ್ಪಣಿ

i. ನಾಲ್ಕರಿಂದ ಎಂಟು ವರ್ಷದೊಳಗಿನ ಬಾಲಕರಿಗಿಂತ ಬಾಲಕಿಯರು ಹೆಚ್ಚಿನ ಪ್ರಮಾಣದಲ್ಲಿ ಶಾಲೆಗೆ ದಾಖಲಾಗಿದ್ದಾರೆ (ಎಎಸ್ಇಆರ್-ಅಸರ್ ವರದಿ)

**https://www.indiatoday.in/education-today/news/story/number-of-girls-getting_enrolled-in-govt-schools-more-than-boys-in-4-8-years-category-aser-report-1636731-2020-01-14**

**ii**

**https://www.eklavya.in/pdfs/Sandarbh/Sandarbh_116/01-11_Malnutrition_Among_High_School_Tribal_Children.pdf**

○○○○

ಟುಲ್‌ಟುಲ್ ಬಿಸ್ವಾಸ್ ಅವರು ಭೋಪಾಲದ ಏಕಲವ್ಯ ಫೌಂಡೇಷನ್‌ನ ಶಿಕ್ಷಕರ ಶಿಕ್ಷಣ, ಔಟ್ ರೀಚ್ ಮತ್ತು ಅಡ್ವೊಕೆಸಿ ಕಾರ್ಯಕ್ರಮದಲ್ಲಿ ಕೆಲಸ ಮಾಡಿದ್ದಾರೆ. ಈ ತಂಡದ ಭಾಗವಾಗಿ ಅವರು, ಶಿಕ್ಷಕರಿಗಾಗಿ ಮತ್ತು ತಳಹಂತದ ಶೈಕ್ಷಣಿಕ ಕಾರ್ಯಕರ್ತರಿಗಾಗಿ ಕಲಿಕಾ ಅವಕಾಶಗಳ ವಿನ್ಯಾಸ, ಕಾರ್ಯಾಗಾರಗಳು ಮತ್ತು ಅಲ್ಪಾವಧಿ ಕೋರ್ಸ್‌ಗಳಲ್ಲಿ ತೊಡಗಿಸಿಕೊಂಡಿದ್ದು, ತರಗತಿ ಕೊಠಡಿಗಳಲ್ಲಿ ಬದಲಾವಣೆ ತರುವ ನಿಟ್ಟಿನಲ್ಲಿ ಶ್ರಮಿಸುತ್ತಿದ್ದಾರೆ. ರಸಾಯನ ವಿಜ್ಞಾನ

ಮತ್ತು ಸಮಾಜವಿಜ್ಞಾನದಲ್ಲಿ ಸ್ನಾತಕೋತ್ತರ ಪದವಿ ಗಳಿಸಿರುವ  ಬಿಸ್ವಾಸ್, ಮೂರು ದಶಕಗಳಿಂದ ಏಕಲವ್ಯ ಫೌಂಡೇಷನ್ ಜೊತೆಗಿದ್ದಾರೆ. ಅದಕ್ಕೂ ಮುಂಚೆ ಅವರು, ಫೌಂಡೇಷನ್‌ನ ಪ್ರಮುಖ, ಮಕ್ಕಳ ನಿಯತಕಾಲಿಕವಾದ, 'ಚಕ್‌ಮಕ್'ನಲ್ಲಿ ಕೆಲಸ ಮಾಡಿದ್ದಾರೆ. ಅವರಿಗೆ ಜಾನಪದ ಮತ್ತು ಶಾಸ್ತ್ರೀಯ ಸಂಗೀತದಲ್ಲಿ ಆಸಕ್ತಿ. ಟುಲ್‌ಟುಲ್ ಬಿಸ್ವಾಸ್ ಅವರ ಸಂಪರ್ಕಕ್ಕೆ: **tultulbiswas@yahoo.com**